ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

KREDL ಸಂಸ್ಥೆಯಲ್ಲಿನ ಗುತ್ತಿಗೆ ನೌಕರರ ಕುರಿತು

ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ (ಪದವೀಧರರ ಕ್ಷೇತ್ರ) :-

709(1005 ) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ KREDL ಸಂಸ್ಥೆಯಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಖಾಯಂ, ಗುತ್ತಿಗೆ ಹಾಗೂ ಹೊರಗುತ್ತಿಗೆ ಏಜೆನ್ಸಿಯಿಂದ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು ; (ಸಿಬ್ಬಂದಿ ಹೆಸರು, ಹುದ್ದೆಯ ಪದನಾಮ ಸೇವೆಗೆ ಸೇರಿದ ದಿನಾಂಕ, ವೇತನ ಶ್ರೇಣಿ ಒಂದು ತಿಂಗಳಿಗೆ ಪಡೆಯುತ್ತಿರುವ ವೇತನ ಗುತ್ತಿಗೆ ನೌಕರರಾಗಿದ್ದರೆ ಕ್ರೋಡಿಕೃತ ವೇತನ ಹಾಗೂ ಹೊರಗುತ್ತಿಗೆ ನೌಕರರ ವೇತನದ ವಿವರಗಳನ್ನು ನೀಡುವುದು)

(ಆ) ಸಂಸ್ಥೆಯಲ್ಲಿ ಜನವರಿ 2006 ರಿಂದ ಇಲ್ಲಿಯವರೆಗೆ ಎಷ್ಟು ಜನರನ್ನು ಗುತ್ತಿಗೆಯಡಿ ನೇಮಕಾತಿ ಮಾಡಿಕೊಳ್ಳಲಾಗಿದೆ ; ಎಷ್ಟು ಜನರನ್ನು ಸಂಸ್ಥೆ ಸೇವೆಯಲ್ಲಿ ವಿಲೀನಗೊಳಿಸಿ ಯಾವ ಯಾವ ದಿನಾಂಕಗಳ ಬೋರ್ಡ್ ಮೀಟಿಂಗ್‌ನಲ್ಲಿ ನಿರ್ಣಯಿಸಿ ಖಾಯಂಗೊಳಿಸಲಾಗಿದೆ ; ಬೋರ್ಡ್ ಮೀಟಿಂಗ್ ನಡವಳಿಗಳ ಪ್ರತಿಯೊಂದಿಗೆ ವಿವರವಾದ ಮಾಹಿತಿ ನೀಡುವುದು ;

(ಇ) ಕಂಪನಿಯ ಸಿ&ಆರ್‌ನ 3.8 ಪ್ರಾವಿಧಾನದಲ್ಲಿ ಏನಿದೆ ; ಸದರಿ ಪ್ರಾವಿಧಾನವು ಹಾಲಿ ಜಾರಿಯಲ್ಲಿದೆಯೇ ; ಈ ಪ್ರಾವಿಧಾನವನ್ನು ತಿದ್ದುಪಡಿ ಮಾಡಲಾಗಿದೆಯೇ ; ವಿವರವಾದ ಮಾಹಿತಿ ನೀಡುವುದು;

(ಈ) ಸದರಿ ಪ್ರಾವಿಧಾನದಡಿ ಎಷ್ಟು ಜನರನ್ನು ಖಾಯಂಗೊಳಿಸಲಾಗಿದೆ; ಇವರಿಗೆ ಸರ್ವೋಚ್ಚ ನ್ಯಾಯಾಲಯದ ಉಮಾದೇವಿ ಪ್ರಕರಣದ ಪರಿನಿಯಮಗಳು ಅನ್ವಯವಾಗುವುದಿಲ್ಲವೆ ; ಅನ್ವಯವಾಗದೇ ಇದ್ದಲ್ಲಿ, ಕಾರಣಗಳೇನು ; (ವಿವರವಾದ ಮಾಹಿತಿ ನೀಡುವುದು)

(ಉ) ಉಚ್ಚ ನ್ಯಾಯಾಲಯವು ಖಾಯಂಗೊಳಿಸಲು ಆದೇಶ ಮಾಡಿದ 15 ಜನರಿಗೆ ಸರ್ವೋಚ್ಚ ನ್ಯಾಯಾಲಯದ ಉಮಾದೇವಿ ಪ್ರಕರಣದ ಪರಿನಿಯಮಗಳು ಅನ್ವಯವಾಗುತ್ತಿವೆಯೇ ; ಏಕೆ ಮತ್ತು ಹೇಗೆ ? (ವಿವರ ಮಾಹಿತಿ ನೀಡುವುದು)